ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೆರಡನೆಯ ಅಧಿವೇಶನ

ಸೋಮವಾರ, ದಿನಾಂಕ : 07 ನೇ ಡಿಸೆಂಬರ್, 2020

ವೈದ್ಯರುಗಳಿಗೆ ಇನ್ಸೆಂಟೀವ್ ಹಣವನ್ನು ಮೀಸಲಿಡುವ ಬಗ್ಗೆ

ಶ್ರೀ ಎಂ. ನಾರಾಯಣಸ್ವಾಮಿ(ಸ್ಥಳೀಯ ಸಂಸ್ಥೆಗಳ ಕ್ಷೇತ್ರ) -

42 (57) ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ -

(ಅ) ವೈದ್ಯರ ಬೇಡಿಕೆಯಂತೆ ರೂ.125 ಕೋಟಿ ಇನ್ಸೆಂಟೀವ್ ಮೀಸಲಿಡಲು ಸರ್ಕಾರವು ಒಪ್ಪಿರುತ್ತದೆಯೇ;

(ಆ) ಸದರಿ ಇನ್ಸೆಂಟೀವ್ ಹಣವನ್ನು ಯಾವ ಯಾವ ಕಾರಣಗಳಿಗೆ ವೆಚ್ಚ ಮಾಡಬೇಕಾಗಿದೆ ಹಾಗೂ ಅದಕ್ಕೆ ನಿಗದಿಪಡಿಸಿರುವ ಮಾನದಂಡಗಳೇನು; (ವಿವರ ನೀಡುವುದು)

(ಇ) ಸದರಿ ಇನ್ಸೆಂಟೀವ್ ಹಣವನ್ನು ವೈದ್ಯರು ಮುಷ್ಕರ ಹೂಡಿದ ನಂತರ ನಿರ್ಧಾರ ತೆಗೆದುಕೊಳ್ಳಲಾಗಿದೆಯೇ;

(ಈ) ಸಮಯಕ್ಕೆ ಸರಿಯಾಗಿ ವೈದ್ಯರ ಬೇಡಿಕೆಯನ್ನು ಸರ್ಕಾರ ಈಡೇರಿಸದೇ ಇರುವುದರಿಂದ ವೈದ್ಯರು ಮುಷ್ಕರ ಕೈಗೊಳ್ಳಲು ಕಾರಣವಾಯಿತು; ಇದಕ್ಕೆ ಸರ್ಕಾರ ಕೈಗೊಂಡ ಕ್ರಮಗಳೇನು?